**ಕರ್ನಾಟಕ ವಿಧಾನ ಪರಿಷತ್ತು**

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 365 |
| ಸದಸ್ಯರ ಹೆಸರು | : | ಶ್ರೀ ಆರ್. ರಾಜೇಂದ್ರ ರಾಜಣ್ಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 18-02-2022. |
| ಉತ್ತರಿಸುವವರು | : | ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ತುಮಕೂರು ಜಿಲ್ಲೆಯಲ್ಲಿ ಒಟ್ಟು ಎಷ್ಟು ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳು ಕರ್ತವ್ಯ ನಿರ್ವಹಿಸುತ್ತಿದ್ದಾರೆ; ಖಾಲಿ ಇರುವ ಪಂಚಾಯಿತಿ ಅಭಿವೃದ್ಧಿ ಅಧಿಕಾರಿ ಹುದ್ದೆಗಳ ಸಂಖ್ಯೆ ಎಷ್ಟು; (ತಾಲ್ಲೂಕುವಾರು ಮಾಹಿತಿ ನೀಡುವುದು) | ತುಮಕೂರು ಜಿಲ್ಲೆಯ ಗ್ರಾಮ ಪಂಚಾಯತಿಗಳಿಗೆ 330 ಪಂಚಾಯತಿ ಅಭಿವೃದ್ಧಿ ಅಧಿಕಾರಿ ಹುದ್ದೆಗಳು ಮಂಜೂರಾಗಿದ್ದು, ಈ ಪೈಕಿ 282 ಹುದ್ದೆಗಳನ್ನು ಭರ್ತಿ ಮಾಡಿದ್ದು, ಉಳಿದ 48 ಹುದ್ದೆಗಳು ಖಾಲಿ ಇರುತ್ತವೆ.<br><br>ತಾಲ್ಲೂಕುವಾರು ವಿವರವನ್ನು ಅನುಬಂಧದಲ್ಲಿ ನೀಡಿದೆ. |
| (ಆ) | ಪಂಚಾಯಿತಿ ಅಭಿವೃದ್ಧಿ ಅಧಿಕಾರಿ ಹುದ್ದೆಗಳು ಖಾಲಿ ಇದ್ದಲ್ಲಿ, ಹುದ್ದೆಗಳನ್ನು ತುಂಬಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ? | ಗ್ರಾಮ ಪಂಚಾಯತಿಗಳ ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳ ಹುದ್ದೆ ನಿವೃತ್ತಿ, ಅಮಾನತ್ತು, ಇನ್ನಿತರೆ ಕಾರಣಗಳಿಂದ ತೆರವಾದಲ್ಲಿ ಆ ಗ್ರಾಮ ಪಂಚಾಯತಿಯಲ್ಲಿ ಗ್ರೇಡ್-1 ಗ್ರಾಮ ಪಂಚಾಯತಿ ಕಾರ್ಯದರ್ಶಿಯು ಪೂರ್ಣಕಾಲಿಕವಾಗಿ ಕಾರ್ಯನಿರ್ವಹಿಸುತ್ತಿದ್ದಲ್ಲಿ ಪ್ರಭಾರದಲ್ಲಿರಿಸುವುದು. ಗ್ರೇಡ್-1 ಗ್ರಾಮ ಪಂಚಾಯತಿ ಕಾರ್ಯದರ್ಶಿಯು ಇಲ್ಲದಿದ್ದಲ್ಲಿ ನೆರೆಯ ಗ್ರಾಮ ಪಂಚಾಯತಿ ಪಂಚಾಯತಿ ಅಭಿವೃದ್ಧಿ ಅಧಿಕಾರಿಗೆ ಹೆಚ್ಚುವರಿ ಪ್ರಭಾರ ವಹಿಸಲು ಸರ್ಕಾರದಿಂದ ಎಲ್ಲಾ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ನಿರ್ದೇಶನ ನೀಡಲಾಗಿದೆ.<br><br>ಮುಂದುವರೆದು, ಪಂಚಾಯತಿ ಅಭಿವೃದ್ಧಿ ಅಧಿಕಾರಿ ವೃಂದಕ್ಕೆ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ನೇಮಕಾತಿ ಪ್ರಾಧಿಕಾರ ಆಗಿದ್ದು, ಗ್ರಾಮ ಪಂಚಾಯತಿ ಕಾರ್ಯದರ್ಶಿ ಗ್ರೇಡ್-1 ವೃಂದದ ಅರ್ಹ ನೌಕರರು ಲಭ್ಯವಾದಂತೆ ಜೇಷ್ಠತೆ ಮತ್ತು ಅರ್ಹತೆ ಆಧಾರದ ಮೇಲೆ ಮುಂಬಡ್ತಿ ಮೂಲಕ ಭರ್ತಿ ಮಾಡಲು ಸಹ ನಿರ್ದೇಶನ ನೀಡಲಾಗಿದೆ. |

ಸಂ. ಗ್ರಾಅಪ 24 ಗ್ರಾಪಂಅ 2022

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಆರ್. ರಾಜೇಂದ್ರ ರಾಜಣ್ಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ರವರ ಚುಕ್ಕೆ ಗುರುತಿನ ಪ್ರಶ್ನೆ ಸಂ: 365 ಕ್ಕೆ ಅನುಬಂಧ

ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳ ತಾಲ್ಲೂಕುವಾರು ಹುದ್ದೆಗಳ ಮಾಹಿತಿ

| ಕ್ರ.ಸಂ. | ತಾಲ್ಲೂಕಿನ ಹೆಸರು | ಒಟ್ಟು ಗ್ರಾಮ ಪಂಚಾಯಿತಿಗಳ ಸಂಖ್ಯೆ | ಮಂಜೂರಾದ ಪಿ.ಡಿ.ಒ. ಗಳ ಸಂಖ್ಯೆ | | ಒಟ್ಟು (3+4) | ಕರ್ತವ್ಯ ನಿರ್ವಹಿಸುತ್ತಿರುವ ನೌಕರರ ಸಂಖ್ಯೆ | | ಒಟ್ಟು (6+7) | ಖಾಲಿ ಇರುವ ಹುದ್ದೆಗಳ ಸಂಖ್ಯೆ | | ಒಟ್ಟು (9+10) |
|---|---|---|---|---|---|---|---|---|---|---|---|
| | | | ನೇರ ನೇಮಕಾತಿ | ಮುಂಬಡ್ತಿ ಕೋಟಾ | | ನೇರ ನೇಮಕಾತಿ | ಮುಂಬಡ್ತಿ ಕೋಟಾ | | ನೇರ ನೇಮಕಾತಿ | ಮುಂಬಡ್ತಿ ಕೋಟಾ | |
| 1 | 2 | 3 | 4 | 5 | 6 | 7 | 8 | 9 | 10 | 11 | 12 |
| 1 | ಚಿ.ನಾ.ಹಳ್ಳಿ | 27 | 18 | 9 | 27 | 11 | 9 | 20 | 7 | 0 | 7 |
| 2 | ಶಿರಾ | 42 | 28 | 14 | 42 | 22 | 13 | 35 | 6 | 1 | 7 |
| 3 | ಕೊರಟಗೆರೆ | 24 | 16 | 8 | 24 | 16 | 7 | 23 | 0 | 1 | 1 |
| 4 | ಮಧುಗಿರಿ | 39 | 29 | 10 | 39 | 28 | 8 | 36 | 1 | 2 | 3 |
| 5 | ಪಾವಗಡ | 34 | 23 | 11 | 34 | 8 | 11 | 19 | 15 | 0 | 15 |
| 6 | ಗುಬ್ಬಿ | 34 | 23 | 11 | 34 | 22 | 10 | 32 | 1 | 1 | 2 |
| 7 | ತಿಪಟೂರು | 26 | 17 | 9 | 26 | 15 | 6 | 21 | 2 | 3 | 5 |
| 8 | ಕುಣಿಗಲ್ | 36 | 24 | 12 | 36 | 17 | 12 | 29 | 7 | 0 | 7 |
| 9 | ತುಮಕೂರು | 41 | 27 | 14 | 41 | 27 | 14 | 41 | 0 | 0 | 0 |
| 10 | ತುರುವೇಕೆರೆ | 27 | 18 | 9 | 27 | 17 | 9 | 26 | 1 | 0 | 1 |
| | | 330 | 223 | 107 | 330 | 183 | 99 | 282 | 40 | 8 | 48 |